<u>ಕರ್ನಾಟಕ ವಿಧಾನ ಪರಿಷತ್ತು</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 185

ಸದಸ್ಯರ ಹೆಸರು : ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 22.09.2020

ಉತ್ತರಿಸುವವರು : ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ನಗರಸಭೆ ವ್ಯಾಪ್ತಿಯಲ್ಲಿರುವ ಒಟ್ಟು ಉದ್ಯಾನವನಗಳೆಷ್ಟು; (ವಿವರ ನೀಡುವುದು) | ಮಂಡ್ಯ ನಗರಸಭೆಯ ವ್ಯಾಪ್ತಿಯಲ್ಲಿರುವ ಒಟ್ಟು ಉದ್ಯಾನವನಗಳ ಸಂಖ್ಯೆ 42 (ಪಟ್ಟಿ ಲಗತ್ತಿಸಿದೆ.) |
| ಆ) | ಸದರಿ ಉದ್ಯಾನವನಗಳ ನಿರ್ವಹಣೆಗೆ ನಗರಸಭೆ ಕೈಗೊಂಡ ಕ್ರಮಗಳೇನು; | 08 ಉದ್ಯಾನವನಗಳನ್ನು 'ಅಮೃತ್' ಯೋಜನೆ ಅಡಿಯಲ್ಲಿ ರೂ 2.00 ಕೋಟಿಗಳಲ್ಲಿ ಅಭಿವೃದ್ಧಿ ಮಾಡಲಾಗಿರುತ್ತದೆ. 14ನೇ ಹಣಕಾಸು ಆಯೋಗದ ಅನುದಾನದಡಿಯಲ್ಲಿ 16 ಪಾರ್ಕ್‌ಗಳನ್ನು, ಎಸ್.ಎಫ್.ಸಿ ವಿಶೇಷ ಅನುದಾನದಡಿಯಲ್ಲಿ 18 ಪಾರ್ಕ್‌ಗಳ ಅಭಿವೃದ್ಧಿಗೆ ಕ್ರಮವಹಿಸಲಾಗಿರುತ್ತದೆ.<br>ಸದರಿ ಪಾರ್ಕ್‌ಗಳ ನಿರ್ವಹಣೆಯನ್ನು ನಗರಸಭಾ ವತಿಯಿಂದ ಮಾಡಲಾಗುತ್ತಿರುತ್ತದೆ.<br>'ಅಮೃತ್' ಯೋಜನೆಯಡಿ ಆಯ್ಕೆಯಾದ ನಗರಗಳು ಕಡ್ಡಾಯವಾಗಿ ವರ್ಷಕ್ಕೆ ಒಂದು ಉದ್ಯಾನವನ್ನು ಅಭಿವೃದ್ಧಿಪಡಿಸಲು ಮಾರ್ಗಸೂಚಿಯಲ್ಲಿ ತಿಳಿಸಲಾಗಿದೆ. ನಗರಸಭೆಯು ಉದ್ಯಾನವನಗಳನ್ನು ನಿರ್ವಹಿಸುತ್ತಿರುತ್ತದೆ. |
| ಇ) | ಉದ್ಯಾನವನಗಳ ನಿರ್ವಹಣೆಯನ್ನು ನಗರಸಭೆಯೇ ನಿರ್ವಹಿಸುತ್ತಿದೆಯೇ; ಅಥವಾ ಹೊರಗುತ್ತಿಗೆ ನೀಡಲಾಗಿದೆಯೇ; | ಕರ್ನಾಟಕ ಪುರಸಭೆ (ನೌಕರರು ಮತ್ತು ಅಧಿಕಾರಿಗಳ) ನೇಮಕಾತಿ ನಿಯಮಗಳು 2010 ರಂತೆ ಗ್ರೇಡ್-1 ನಗರಸಭೆಗೆ ಒಟ್ಟು 1 ಹೆಡ್ ಗಾರ್ಡನರ್ ಹಾಗೂ 5 ಗಾರ್ಡನರ್ ಹುದ್ದೆಗಳು ಮಂಜೂರಾಗಿದ್ದು, ಹಾಲಿ ನಗರಸಭೆಯ ಪಾರ್ಕ್ ವಿಭಾಗದಲ್ಲಿ 08 ಕಾರ್ಮಿಕರು/ ಸಿಬ್ಬಂದಿಗಳು ಕಾರ್ಯ ನಿರ್ವಹಿಸುತ್ತಿರುತ್ತಾರೆ. ಸದರಿ ಸಿಬ್ಬಂದಿಗಳ ಮೂಲಕ ಉದ್ಯಾನವನಗಳ ನಿರ್ವಹಣೆಯನ್ನು ನಗರಸಭೆ ವತಿಯಿಂದಲೇ ಸಮರ್ಪಕವಾಗಿ ಮಾಡಲಾಗುತ್ತಿದೆ. |
| ಈ) | ಈ ಉದ್ಯಾನವನಗಳ ಅಭಿವೃದ್ಧಿಗೆ ಅನುದಾನವನ್ನು ನೀಡಲಾಗಿದೆಯೇ; (ವಿವರ ನೀಡುವುದು) | 1) 14ನೇ ಹಣಕಾಸು ಅನುದಾನದಡಿಯಲ್ಲಿ 2017-18ನೇ ಸಾಲಿನಲ್ಲಿ ರೂ. 22.50 ಲಕ್ಷ ಮತ್ತು 2018-19ನೇ ಸಾಲಿನಲ್ಲಿ ರೂ. 23.48 ಲಕ್ಷಗಳ ಅನುದಾನದಡಿಯಲ್ಲಿ ಪಾರ್ಕ್‌ಗಳ ಅಭಿವೃದ್ಧಿಗೆ ಅನುದಾನ ಒದಗಿಸಲಾಗಿದೆ.<br>2) 'ಅಮೃತ್' ಯೋಜನೆಯಡಿಯಲ್ಲಿ ಉದ್ಯಾನವನಗಳ ಅಭಿವೃದ್ಧಿಗೆ ರೂ. 200.00 ಲಕ್ಷಗಳನ್ನು ನೀಡಲಾಗಿದೆ<br>3) 2018-19ನೇ ಸಾಲಿನ ರಾಜ್ಯ ಸರ್ಕಾರದ ಆಯವ್ಯಯದಲ್ಲಿ ಮಂಡ್ಯ ನಗರದ ಅಭಿವೃದ್ಧಿಗಾಗಿ ಘೋಷಿಸಿರುವ ರೂ.50.00 ಕೋಟಿಗಳಲ್ಲಿ ರೂ.7.55 ಕೋಟಿಗಳನ್ನು |

| | | |
|---|---|---|
| | | ಉದ್ಯಾನವನಗಳ ಅಭಿವೃದ್ಧಿಗೆ ಕಾಯ್ದಿರಿಸಲಾಗಿದೆ. |
| ಊ) | ಈ ಉದ್ಯಾನವನಗಳ ಅಭಿವೃದ್ಧಿಗೆ ಸರ್ಕಾರ ಕೈಗೊಂಡ ಕ್ರಮಗಳೇನು? | 1) 14ನೇ ಹಣಕಾಸು ಆಯೋಗದ ಸಾಮಾನ್ಯ ಮೂಲ ಅನುದಾನದಡಿ ಹಂಚಿಕೆಯಾದ ಅನುದಾನಕ್ಕೆ ಗರಿಷ್ಠ ಶೇ.40 ರಷ್ಟನ್ನು ಉದ್ಯಾನವನ ಅಭಿವೃದ್ಧಿಗಾಗಿ ಬಳಸಲು ಮಾರ್ಗಸೂಚಿಯಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 42 ಎಸ್‌ಎಫ್‌ಸಿ 2017, ದಿನಾಂಕ: 3.4.2017 ಹಾಗೂ ಸಾಮಾನ್ಯ ಕಾರ್ಯನಿರ್ವಹಣಾ ಅನುದಾನದಡಿ ಬಿಡುಗಡೆಯಾದ ಮೊತ್ತಕ್ಕೆ ಗರಿಷ್ಠ ಶೇ.5 ರಷ್ಟು ಸಮುದಾಯ ಆಸ್ತಿಗಳ ನಿರ್ವಹಣೆ (ಪಾರ್ಕ್ ಒಳಗೊಂಡಂತೆ) ಬಳಸಲು ಮಾರ್ಗಸೂಚಿಯಲ್ಲಿ ಸರ್ಕಾರ ಸುತ್ತೋಲೆ ಸಂಖ್ಯೆ: ನಅಇ 46 ಎಸ್‌ಎಫ್‌ಸಿ 2016, ದಿನಾಂಕ: 25.2.2016 ಹೊರಡಿಸಲಾಗಿದೆ. (ಪ್ರತಿ ಲಗತ್ತಿಸಿದೆ).<br><br>2) 2020-21ನೇ ಸಾಲಿನ 15ನೇ ಹಣಕಾಸು ಆಯೋಗದ ಅನುದಾನದಡಿ ಮುಕ್ತ ಅನುದಾನ (untied grants) ಅಡಿಯಲ್ಲಿ ಹಂಚಿಕೆಯಾದ ಮೂಲ ಅನುದಾನದ ಗರಿಷ್ಠ ಮೊತ್ತ ಶೇ.20 ರಷ್ಟು ಅನುದಾನ ಹಸಿರು ಜಾಗ ಮತ್ತು ಉದ್ಯಾನವನ ಅಭಿವೃದ್ಧಿಗಾಗಿ ಬಳಸಲು ಮಾರ್ಗಸೂಚಿಯಲ್ಲಿ ಸರ್ಕಾರದಿಂದ ಸುತ್ತೋಲೆ ಸಂಖ್ಯೆ: ನಅಇ 177 ಎಸ್‌ಎಫ್‌ಸಿ 2020, ದಿನಾಂಕ: 29.6.2020, ಹೊರಡಿಸಲಾಗಿದೆ (ಪ್ರತಿ ಲಗತ್ತಿಸಿದೆ).<br><br>ಮೇಲಿನ ಸುತ್ತೋಲೆಗಳಂತೆ ಮಂಡ್ಯ ನಗರಸಭೆಯು ಲಭ್ಯವಿರುವ ಅನುದಾನದಲ್ಲಿ ಆವಶ್ಯಕತೆಗನುಗುಣವಾಗಿ ಉದ್ಯಾನವನ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ನಿರ್ದೇಶಿಸಲಾಗಿದೆ.<br><br>ಅದರಂತೆ ಮಂಡ್ಯ ನಗರಸಭೆಯು ವಿವಿಧ ಯೋಜನೆಗಳ ಅನುದಾನದಡಿ ಈ ಕೆಳಕಂಡಂತೆ ಉದ್ಯಾನವನ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಂಡಿದೆ.<br>1. 14ನೇ ಹಣಕಾಸು ಆಯೋಗದ ಅನುದಾನದಡಿಯಲ್ಲಿ 2017-18ನೇ ಸಾಲಿನಲ್ಲಿ ರೂ. 22.50 ಲಕ್ಷ.<br>2. 14ನೇ ಹಣಕಾಸು ಆಯೋಗದ ಅನುದಾನದಡಿಯಲ್ಲಿ 2018-19ನೇ ಸಾಲಿನಲ್ಲಿ ರೂ. 23.48 ಲಕ್ಷಗಳ ಅನುದಾನದಡಿಯಲ್ಲಿ ಪಾರ್ಕ್‌ಗಳ ಅಭಿವೃದ್ಧಿಗೆ ಕ್ರಮವಹಿಸಲಾಗಿದೆ.<br>3. 'ಅಮೃತ್' ಯೋಜನೆಯಡಿಯಲ್ಲಿ ಉದ್ಯಾನವನಗಳ ಅಭಿವೃದ್ಧಿಗೆ ರೂ. 200.00 ಲಕ್ಷ.<br>4. 4) 2018-19ನೇ ಸಾಲಿನ ರಾಜ್ಯ ಸರ್ಕಾರದ ಆಯವ್ಯಯದಲ್ಲಿ ಮಂಡ್ಯ ನಗರದ ಅಭಿವೃದ್ಧಿಗಾಗಿ ಘೋಷಿಸಿರುವ ರೂ.50.00 ಕೋಟಿಗಳಲ್ಲಿ ರೂ.755.00 ಲಕ್ಷ ಕಾಯ್ದಿರಿಸಲಾಗಿದೆ. |

ಸಂ: ನಅಇ 92 ಜಿಇಎಲ್ 2020

ಡಾ. ನಾರಾಯಣ ಗೌಡ
ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು